

## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 211 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 13/09/2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹೊಸದಾಗಿ ಮೆಡಿಕಲ್ ಕಾಲೇಜುಗಳನ್ನು ಪ್ರಾರಂಭಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಉದ್ದೇಶಿತ ಕಾಲೇಜುಗಳ ಪ್ರಾರಂಭವಾಗುವುದು ಯಾವಾಗ; (ವಿವರ ನೀಡುವುದು) | 2021-22 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಹೊಸ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯನ್ನು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಡಿ ಪ್ರಾರಂಭಿಸಲು ಘೋಷಿಸಲಾಗಿದೆ.<br><br>ಉದ್ದೇಶಿತ ಸಂಸ್ಥೆಯನ್ನು ಪ್ರಾರಂಭಿಸಲು ಸಂಬಂದಪಟ್ಟ ಇಲಾಖೆಗಳೊಡನೆ ಸಮಾಲೋಚಿಸಿ ಆದೇಶ ಹೊರಡಿಸಲಾಗುವುದು. |
| ಆ) | ರಾಜ್ಯದಲ್ಲಿನ ವಿದ್ಯಾರ್ಥಿಗಳು ನೀಟ್ ಪರೀಕ್ಷೆ ಬರೆದು ರಾಜ್ಯದ ಮೆಡಿಕಲ್ ಕಾಲೇಜುಗಳಲ್ಲಿ ದಾಖಲಾತಿ ದೊರೆಯದೆ ಹೊರ ರಾಜ್ಯಗಳಿಗೆ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ. |
| ಇ) | ರಾಜ್ಯದಲ್ಲಿರುವ ಖಾಸಗಿ ಮೆಡಿಕಲ್ ಕಾಲೇಜುಗಳಲ್ಲಿನ ದುಬಾರಿ ಶುಲ್ಕದ ಕಾರಣ ನಮ್ಮ ರಾಜ್ಯದ ಪೋಷಕರು ಅವರ ಮಕ್ಕಳನ್ನು ಹೊರ ರಾಜ್ಯಗಳ ಮೆಡಿಕಲ್ ಕಾಲೇಜುಗಳಿಗೆ ದಾಖಲು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯ ಸರ್ಕಾರ ಮತ್ತು ಖಾಸಗಿ ವೈದ್ಯಕೀಯ ಸಂಸ್ಥೆಗಳ ಸಂಘಟನೆಗಳ ಪದಾಧಿಕಾರಿಗಳೊಂದಿಗೆ ಸುಧೀರ್ಘವಾಗಿ ಚರ್ಚಿಸಿ ಸಮ್ಮತಾಭಿಪ್ರಾಯದ ಒಪ್ಪಂದದ ಮೇರೆಗೆ ಶುಲ್ಕವನ್ನು ನಿಗಧಿಪಡಿಸಲಾಗುತ್ತಿದೆ. ನೀಟ್ ಪರೀಕ್ಷೆ ಆಧಾರದ ಮೇಲೆ ಸೀಟು ಹಂಚಿಕೆ ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ) | ಹಾಗಿದ್ದಲ್ಲಿ, ಈ ಬಗ್ಗೆ ಖಾಸಗಿ ಮೆಡಿಕಲ್ ಕಾಲೇಜುಗಳಲ್ಲಿ ದುಬಾರಿ ಶುಲ್ಕಕ್ಕೆ ಕಡಿವಾಣ ಹಾಕಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳಾವುವು; (ವಿವರ ನೀಡುವುದು) | ಸಮ್ಮತಾಭಿಪ್ರಾಯದ ಒಪ್ಪಂದದಂತೆ ಶುಲ್ಕವನ್ನು ಭರಿಸಬೇಕಿರುತ್ತದೆ. ಹೆಚ್ಚಿನ ಶುಲ್ಕವನ್ನು ವಿಧಿಸಿದಲ್ಲಿ, ಈ ಬಗ್ಗೆ "ಪ್ರವೇಶ ಮೇಲ್ವಿಚಾರಣಾ ಸಮಿತಿ"ಗೆ ದೂರು ದಾಖಲಿಸಲು ಅವಕಾಶ ಕಲ್ಪಿಸಲಾಗಿದೆ. |
| ಉ) | ನೆರೆ ರಾಜ್ಯವಾದ ತಮಿಳುನಾಡಿನ ರೀತಿಯಲ್ಲಿ ಸಿ.ಇ.ಟಿ ಮೀಸಲಾತಿ ಮಾದರಿಯನ್ನು ನಮ್ಮ ರಾಜ್ಯದಲ್ಲಿ ಅಳವಡಿಸುವ ಚಿಂತನೆ ಸರ್ಕಾರಕ್ಕಿದೆಯೇ? | ಪ್ರಸ್ತುತದಲ್ಲಿ ಈ ಪ್ರಸ್ತಾವನೆ ಚಿಂತನೆ ಸರ್ಕಾರದ ಮುಂದೆ ಇರುವುದಿಲ್ಲ. |

ಸಂಖ್ಯೆ: ಎಂಇಡಿ 445 ಎಂಎಂಸಿ 2021

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು